ಮೇಲುಗುಡಿಗಳ ಛದ್ರದುಪ್ಪರ
ಸಾಲೆಗಳ ಮಂಡವಿಗೆಗಳ ಬ
ಲ್ಲಾಳದಡ್ಡಿಯ ಚಂಪೆಯದ ಗೂಡಾರದೋವರಿಯ ।
ಸಾಲಕಳಸದ ಪಟ್ಟವಸ್ತ್ರದ
ಮೇಲುಕಟ್ಟಿನ ರಚನೆಯೊಳು ರಾ
ಜಾಲಯಂಗಳ ರಚಿಸಿದರು ಕುಂತೀಕುಮಾರರಿಗೆ ॥ ೪೫

ಅರಮನೆಯ ಬಲದೊಳು ಮುರಾಂತಕ
ನರಮನೆಯುದಱ ಕೆಲದೊಳರ್ಜುನ
ನಿರವು ಹಿಂದಣ ಭಾಗದೊಳು ನಕುಲಂಗೆ ಬೀಡಾರ ।
ಅರಿಭಯಂಕರಭೀಮಸೇನನ
ನಿರುಪಮಾಲಯ ಮೆಡದದೆಸೆಯೊಳು
ಸರಿಸದೊಳು ಸೂತ್ರಿಸಿತು ಸಹದೇವಂಗೆ ನೃಪಭವನ ॥ ೪೬

*

ವೀರಪಾಂಡವರವರವರಸುಕು
ಮಾರವರ್ಗದ ಮಂಡವಿಗೆಗೂ
ಡಾರಗಳನೊಳಹೊಯ್ದು ಬಿಗಿದರು ತೆಱಯ ದಡ್ಡಿಗಳ ।
ವಾರಣದ ಶಾಲೆಯದು ಸುತ್ತಲು
ಭಾರಿಸಿತು ಪಾಂಚಾಲಮತ್ಸ್ಯರ
ಭೂರಿಬಲ ಬಿಟ್ಟುದು ಮಹೀಶರ ಗುಡಿಯ ಬಳಸಿನೊಳು ॥ ೪೭

---

ರಾಜಭವನದ ಮುಂದೆ ಬಲದೊಳು
ಮೂಜಗಕ್ಕಧಿದೈವವಗ್ಗದ
ರಾಜಸೂಯಕ್ರತುವ ಪಾಯ್ದಱನಿಳಯವನು ರಚಿಸಿ ।
ರಾಜರಾಜನ ಪುರಕೆ ಸರಿಮಿಗಿ
ಲೀಜಗಕ್ಕೆನೆ ದ್ರುಪದಸುತೆಯ ಸ
ಮಾಜರಿಗೆ ನಿಜಭವನವಾದುವು ನೃಪತಿ ಕೇಳೆಂದ ॥

ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಎರಡುಬಾಗಿಲ ಸೂತ್ರದೊಳು ವಿ
ಸ್ತರಿಸಿದಂಗಡಿ ಸೋಮವೀಧಿಯು
ತರಣಿವೀಧಿಯನವರವರ ಪಾಳೆಯಕೆ ಮುರೀವುಗಳ ।
ಸುರರು ಸೃಷ್ಟಿಸಬಾರದಿನ್ನು ಙು
ದರಿಗೆ ಗೋಚರವಹುದೆ ಕೌಂತೇ
ಯರ ಸಮಗ್ರದ ಬೀಡು ಕುರುಭೂಮಿಯೊಳು ರಂಜಿಸಿತು॥ ೪೮

ಕೇಳು ಜನಮೇಜಯಧರಿತ್ರೀ
ಪಾಲ ಬೀಡಿನ ರಕ್ಷೆ ಬಲಿದುದು
ಪಾಳೆಯದ ಬಲುಹೊದಕೆ ಹೊಱವಳಯದೊಳು ಕಲುಕೋಟೆ ।
ಮೇಲೆ ಪಡಿಯಗಳಾಶ್ರಯಕೆ ಮುಳು
ವೇಲಿ ದೀಹದ ಸಿಂಹ ಶರಭ
ವ್ಯಾಳ ಶಾರ್ದೂಲಾವಳಿಯು ಸುಯ್ದಾನವೊಪ್ಪಿದುದು ॥ ೪೯

ಬಲದ ಮುಂಗಡಿ ಭೀಮನದು ಪಿಂ
ತಿಳೆಯೊಳಾತನ ಕಾಹು ಬೀಡಿನ
ವಳಯದಾರೈಕೆಗಳು ಸಾತ್ಯಕಿ ನಕುಲ ಪಾರ್ಥರಿಗೆ ।
ಬಲಮಹಾಂಬುಧಿಯೊಳಗಿರುಳು ಮೇ
ಲ್ಮಳವರನು ಹೈಡಿಂಬಿ ಪಾಂಡವ
ರುಙುವು ಗದುಗಿನ ವೀರನಾರಾಯಣನ ಸುಯ್ದಾನ ॥ ೫೦

ಹನ್ನೆರಡನೆಯ ಸಂಧಿ ಮುಗಿದುದು.

---

ಶ್ರೀಮದಚಿಂತ್ಯಮಹಿಮಗದುಗುವೀರನಾರಾಯಣಚರಣಾರವಿಂದನಿರಂತರಧ್ಯಾನ
ಮಧುಪಾನಪುಷ್ಟಷಟ್ಪದನಿಕಾಯಮಪ್ಪ ಶ್ರೀಮತ್ಕುಮಾರವ್ಯಾಸ
ಯೋಗೀಂದ್ರವಿರಚಿತಮಪ್ಪ ಕರ್ಣಾಟಕಭಾರತಕಥಾಮಂಜರಿಯೊಳ್
ಉದ್ಯೋಗಪರ್ವಂ ಸಮಾಪ್ತಂ ಮಂಗಳಂ

---